

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 267 . |
| ಸದಸ್ಯರ ಹೆಸರು | ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಕಲ್ಲುಕ್ವಾರಿಗಳಿಗೆ ಪರವಾನಿಗೆಯನ್ನು ನೀಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ನಿರ್ದಿಷ್ಟ ಉಪಖನಿಜಗಳ ಗಣಿಗಾರಿಕೆಗಾಗಿ 581 ಕಲ್ಲುಗಣಿ ಗುತ್ತಿಗೆಗಳನ್ನು 3090.25 ಎಕರೆ ಪ್ರದೇಶದಲ್ಲಿ ಹಾಗೂ ನಿರ್ದಿಷ್ಟವಲ್ಲದ ಉಪಖನಿಜಗಳ ಗಣಿಗಾರಿಕೆಗಾಗಿ 2940 ಗುತ್ತಿಗೆಗಳನ್ನು 12958.02 ಎಕರೆ ಪ್ರದೇಶದಲ್ಲಿ ಮಂಜೂರು ಮಾಡಲಾಗಿರುತ್ತದೆ.<br>ವಿವರಗಳನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಆ) | ಕಲ್ಲುಕ್ವಾರಿಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರ ಆರೋಗ್ಯ ಹಾಗೂ ಜೀವನ ನಿರ್ವಹಣೆಗೆ ಕನಿಷ್ಟ ವೇತನ ನೀಡುವ ಬಗ್ಗೆ ಸರ್ಕಾರವು ಮಾರ್ಗಸೂಚಿಯನ್ನು ರೂಪಿಸಿದೆಯೇ; (ರೂಪಿಸಿದ್ದಲ್ಲಿ, ವಿವರ ಒದಗಿಸುವುದು) | ಕಲ್ಲು ಕ್ವಾರಿಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರಿಗೆ ಕನಿಷ್ಟ ವೇತನ ಪಾವತಿಸುವುದಕ್ಕೆ ಸಂಬಂಧಿಸಿದಂತೆ "ಕಲ್ಲು ಒಡೆಯುವುದು ಮತ್ತು ಕಲ್ಲು ಪುಡಿ ಮಾಡುವ ಉದ್ದಿಮೆಗಳಲ್ಲಿ ಉದ್ಯೋಗ" ಉದ್ದಿಮೆಯನ್ನು ಕನಿಷ್ಟ ವೇತನ ಕಾಯ್ದೆ, 1948ರ ಅನುಸೂಚಿಯಲ್ಲಿ ಸೇರ್ಪಡೆಗೊಳಿಸಿ, 1952 ರಲ್ಲಿ ಪ್ರಥಮ ಬಾರಿಗೆ ಕನಿಷ್ಟ ವೇತನ ದರಗಳನ್ನು ನಿಗದಿಪಡಿಸಲಾಗಿರುತ್ತದೆ ತದನಂತರ ನಿಯಮಾನುಸಾರ ಕಾಲಕಾಲಕ್ಕೆ ಕನಿಷ್ಠ ವೇತನ ದರಗಳನ್ನು ಪರಿಷ್ಕರಿಸಲಾಗುತ್ತಿದೆ.<br>ಪ್ರಸ್ತುತ 2021-22ನೇ ಸಾಲಿಗೆ ಅನ್ವಯವಾಗುವ ಕನಿಷ್ಟ ವೇತನ ದರಗಳ ಪಟ್ಟಿಯನ್ನು **ಅನುಬಂಧ-2 ರಲ್ಲಿ** ನೀಡಲಾಗಿದೆ. |
| ಇ) | ಕಲ್ಲುಗಣಿಗಾರಿಕೆ ಪರವಾನಗಿ ಪಡೆಯಲು ಇರುವ ಮಾನದಂಡಗಳೇನು; ಅಕ್ರಮ ಕಲ್ಲುಗಣಿಗಾರಿಕೆ ನಡೆಯುತ್ತಿರುವುದು | ದಿನಾಂಕ 12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ನ್ನು ಜಾರಿಗೆ ತಂದಿದ್ದು, ಸದರಿ ನಿಯಮಗಳಂತೆ ಸರ್ಕಾರಿ ಜಮೀನುಗಳಲ್ಲಿ ಲಭ್ಯವಿರುವ ಉಪಖನಿಜ ನಿಕ್ಷೇಪಗಳನ್ನು ಹರಾಜು ಮೂಲಕ ಮಂಜೂರು ಮಾಡಬೇಕಾಗಿರುತ್ತದೆ. |

--2